ಎಸ್. ಎಂ. ನಾಗಭೂಷಣ

# ಕೊಟ್ಟೂರಿನ ಪ್ರಾಚ್ಯ ಅವಶೇಷಗಳು: ಒಂದು ಸಮೀಕ್ಷೆ

ಕೊಟ್ಟೂರು ಒಂದು ಪ್ರಾಚೀನ ಪಟ್ಟಣ. ಇದು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿಯಿಂದ ಪಶ್ಚಿಮಕ್ಕೆ ೧೮ ಕಿ.ಮೀ. ಅಂತರದಲ್ಲಿದೆ. ಈ ಪ್ರಾಚೀನ ಪಟ್ಟಣದಲ್ಲಿ, ಬೇರೆ ಬೇರೆ ಕಾಲಮಾನಗಳಿಗೆ ಸೇರಿದ ಪ್ರಾಚ್ಯ ಅವಶೇಷಗಳು ಕಂಡುಬರುತ್ತವೆ. ಅವುಗಳನ್ನು ಪ್ರಾಚೀನ ಹಾಗೂ ಅರ್ವಾಚೀನ ಕಾಲದ ಪ್ರಾಚ್ಯ ಅವಶೇಷಗಳೆಂದು ವಿಂಗಡಿಸಬಹುದು. ಪ್ರಾಚೀನ ಕಾಲಕ್ಕೆ ಸೇರಿದ ಅಂದರೆ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದ ದೇವಸ್ಥಾನಗಳು, ಶಾಸನಗಳು ಇಲ್ಲಿವೆ. ಗದ್ದೆಕಲ್ಲೇಶ್ವರ ಸಿರಿಮಠ, ಮೂರು ಕಲ್ಲು ಮಠಗಳೆಂದು ಇವುಗಳನ್ನು ಶಾಸನಗಳಲ್ಲಿ ಬೇರೆ ಹೆಸರುಗಳಿಂದ ಕರೆಯಲಾಗಿದೆ. ಇವಲ್ಲದೆ, ಅರ್ವಾಚೀನ ಕಾಲದ ಮೂರು ಕೊಟ್ಟೂರೇಶ್ವರ ಮಠಗಳಿದ್ದು, ಅವುಗಳನ್ನು ಹಿರೇಮಠ, ತೊಟ್ಟಿಲಮಠ ಹಾಗೂ ಗಚ್ಚಿನ ಮಠಗಳೆಂದು ಕರೆಯುತ್ತಾರೆ. ಇವಲ್ಲದೇ ವೀರಭದ್ರ ದೇವರು, ರಾಮಲಿಂಗದೇವರು, ಚಂದ್ರಮೌಳೇಶ್ವರ, ಬನಶಂಕರಿ ಹಾಗೂ ಕೊಟ್ರಮ್ಮನ ಗುಡಿಗಳಿವೆ.

ಈ ಪಟ್ಟಣದಲ್ಲಿ ಬೇರೆ ಬೇರೆ ರಾಜಮನೆತನಗಳಿಗೆ ಸೇರಿದ ಅನೇಕ ಶಾಸನಗಳು ಸಿಕ್ಕುತ್ತವೆ. ಅವುಗಳಲ್ಲಿ ನಾಲ್ಕು ಶಾಸನಗಳು ಪ್ರಕಟವಾಗಿವೆ; ಉಳಿದ ಏಳು ಶಾಸನಗಳು ಇನ್ನೂ ಅಪ್ರಕಟಿತ.

ಕೊಟ್ಟೂರು : 'ಕೊಟ್ಟೂರು ಗ್ರಾಮ' ಕಲ್ಯಾಣ ಚಾಲುಕ್ಯರ ಕಾಲಕ್ಕಿಂತ ಮೊದಲಿನಿಂದಲೂ ಬೆಳೆದು ಬಂದ ಪಟ್ಟಣವಿರಬಹುದು. ಇದು ಒಂದು ಆಡಳಿತಕೇಂದ್ರವಾಗಿಯೂ ವ್ಯಾಪಾರಕೇಂದ್ರವಾಗಿಯೂ ಇತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ಇದುವರೆಗೆ ನಮಗೆ ತಿಳಿದುಬಂದಂತೆ, ಗದ್ದೆಕಲ್ಲೇಶ್ವರ ದೇವಸ್ಥಾನದ ಸಮೀಪದಲ್ಲಿ ಕಲ್ಯಾಣ ಚಾಲುಕ್ಯ ತ್ರಿಭುವನಮಲ್ಲನ ಕಾಲದ ಶಾಸನದಲ್ಲಿ (ಕ್ರಿ.ಶ. ೧೧೧೨) ಮೊಟ್ಟಮೊದಲು ಕೊಟ್ಟೂರು[1] ಎಂಬ ಹೆಸರಿನ ಉಲ್ಲೇಖ ಸಿಕ್ಕಿರುತ್ತದೆ. ಅಲ್ಲದೇ ಸುತ್ತಮುತ್ತಲ ಬಾಗಳಿ, ಕೋಗಳಿ, ಅಂಬಳಿ, ತೆಲಗಿಯ ಶಾಸನಗಳಲ್ಲಿ ಕೊಟ್ಟುಪೆರ್ಪನ್ನೆರಡು[2] ಕೊಟ್ಟೂರು ಸೀಮೆ[3] ಎಂದು ಬಣ್ಣಿಸಲಾಗಿದೆ. ಆದರೆ 'ಕೊಟ್ಟೂರು ಬಸವೇಶ್ವರ ಚಾರಿತ್ರ'ದಲ್ಲಿ 'ಸರಸೀಪುರಂ'[4] ಎಂದು ಕರೆದಿದ್ದಾರೆ. ಈ ಹಿನ್ನೆಲೆಯಲ್ಲಿ ಕೊಟ್ಟೂರಿನ ಪ್ರಾಚೀನ ವಾಸ್ತುಶಿಲ್ಪಗಳನ್ನು ಅಭ್ಯಸಿಸಿ ಒಂದು ಸಂಕ್ಷಿಪ್ತ ಸಮೀಕ್ಷೆಯನ್ನು ನೀಡಲು ಪ್ರಯತ್ನಿಸಲಾಗಿದೆ.

## ವಾಸ್ತುಶಿಲ್ಪ

೧. **ಗದ್ದೆಕಲ್ಲೇಶ್ವರ ದೇವಸ್ಥಾನ :** ಇದುವರೆಗೆ ತಿಳಿದುಬಂದಂತೆ ಗದ್ದೆಕಲ್ಲೇಶ್ವರ ದೇವಸ್ಥಾನವು

---

1 ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಸಂಪುಟ ೯–೧, ಸಂಖ್ಯೆ ೧೮೭, ಪು. ೧೮೧, ೧೯ನೇ ಸಾಲು

2 ಅದೇ, ಸಂಖ್ಯೆ ೨೫೧, ಪು. ೨೬೦, ೩೫ನೇ ಸಾಲು

3 ಅದೇ, ಸಂಖ್ಯೆ ೫೨೨, ಪು. ೫೩೮, ೮ನೇ ಸಾಲು

4 ಆರ್. ಸಿ. ಹಿರೇಮಠ (ಸಂ.) : ಕೊಟ್ಟೂರ ಬಸವೇಶ್ವರ ಚಾರಿತ್ರ, ಸಂಧಿ ೨, ಪದ್ಯ ೯

ಈ ಗ್ರಾಮದ ಪ್ರಾಚೀನತಮ ದೇವಾಲಯವಾಗಿದೆ. ಇದು ಗ್ರಾಮದ ಪೂರ್ವದಿಕ್ಕಿನಲ್ಲಿಯ ಗದ್ದೆಗಳ ಮಧ್ಯದಲ್ಲಿರುವುದರಿಂದ 'ಗದ್ದೆಕಲ್ಲೇಶ್ವರ' ಎಂದು ಹೆಸರು ಬಂದಿರಬಹುದು. ಆದರೆ ಶಾಸನದಲ್ಲಿ ಇದನ್ನು ರಾಮೇಶ್ವರ ದೇವಸ್ಥಾನ[5] ಎಂದು ಕರೆಯಲಾಗಿದೆ. ಗರ್ಭಗೃಹ ಅಂತರಾಳಗಳನ್ನು ಬಿಟ್ಟು ಉಳಿದ ಭಾಗವೆಲ್ಲಾ ಪಾಳುಬಿದ್ದಿದೆ. ಈ ದೇವಾಲಯದ ವಾಸ್ತು, ಶಿಲ್ಪ ಮತ್ತು ಶಾಸನಗಳ ಆಧಾರದಿಂದ ಇದನ್ನು ಕಲ್ಯಾಣ ಚಾಲುಕ್ಯರ ಕಾಲದ ಮತ್ತು ಶೈಲಿಯ ದೇವಾಲಯ ಎಂದು ಹೇಳಬಹುದು. ವಿಚಿತ್ರವೆಂದರೆ, ಇದನ್ನು ಕಣಶಿಲೆಯಿಂದ ಕಟ್ಟಿದೆ. ಆದರೆ ಸಾಮಾನ್ಯವಾಗಿ ಕಲ್ಯಾಣ ಚಾಲುಕ್ಯರ ದೇವಾಲಯಗಳನ್ನು ಬಳಪದಕಲ್ಲು ಅಥವಾ ಪಾಟಿಕಲ್ಲಿನಿಂದ ಕಟ್ಟಿದ್ದು ನಮಗೆ ತಿಳಿದಿದೆ. ಪೀಠ, ಶಿವಲಿಂಗ, ಮುಖಮಂಟಪಗಳಿಗೆ ಬಳಪದಕಲ್ಲು ಬಳಸಲಾಗಿದೆ. ಮತ್ತೊಂದು ವಿಶೇಷವೆಂದರೆ, ಈ ದೇವಾಲಯ ದಕ್ಷಿಣಾಭಿಮುಖವಾಗಿದೆ. ಸಾಮಾನ್ಯವಾಗಿ ದೇವಾಲಯಗಳು ಪೂರ್ವಾಭಿಮುಖವಾಗಿರುತ್ತವೆ. ಪಕ್ಕದಲ್ಲಿಯೇ ಮತ್ತೊಂದು ಗರ್ಭಗುಡಿ ಅಂತರಾಳಗಳನ್ನೊಳಗೊಂಡ ಗಣಪತಿ ದೇವಸ್ಥಾನವು ಪೂರ್ವಾಭಿಮುಖವಾಗಿದೆ. ನವರಂಗ ಭಾಗ ಸಂಪೂರ್ಣ ಭಗ್ನವಾಗಿದೆ. ಅದರ ಕುರುಹಾಗಿ ಒಂದು ಕಂಬ ಮಾತ್ರ ಉಳಿದಿದೆ.

**ಗರ್ಭಗೃಹ :** ಚೌಕಾಕಾರದ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಮೇಲೆ ಛತ್ತು ಚೌರಸಗಳಿಂದ ಕೂಡಿದ್ದು ತುದಿಯಲ್ಲಿ ಪದ್ಮವಿನ್ಯಾಸವುಳ್ಳ ಫಲಕವಿದೆ. ಗರ್ಭಗೃಹದ ಬಾಗಿಲು ಸುಂದರ ಶಿಲ್ಪಕಲಾಕೃತಿಯಿಂದ ತುಂಬಿದೆ. ರತ್ನಶಾಖೆ, ಲತಾಶಾಖೆ, ಸ್ಥಂಬಶಾಖೆ, ಲತಾಸುರಳಿಶಾಖೆಗಳಿಂದ ಕೂಡಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಅಂತರಾಳದಲ್ಲಿ ಶಿಲ್ಪ ಅಲಂಕಾರಗಳಿಲ್ಲ. ಮುಖಮಂಟಪ ಹಾಳಾಗಿದೆ. ನವರಂಗ ಹಾಳಾಗಿದ್ದು, ಈಗಾಗಲೇ ಹೇಳಿದಂತೆ ಒಂದು ಕಂಬ ಮಾತ್ರ ಉಳಿದಿದೆ. ನವರಂಗದ ದಕ್ಷಿಣಕ್ಕೆ ಪೂರ್ವಾಭಿಮುಖವಾಗಿ ಅದೇರೀತಿಯ ಅಂತರಾಳ ಗರ್ಭಗೃಹವಿದ್ದು ಗರ್ಭಗುಡಿಯಲ್ಲಿ ಶಿವಲಿಂಗದ ಬದಲು ಗಣಪತಿ ವಿಗ್ರಹವಿದೆ. ಇದನ್ನು ಅನಂತರ ಪ್ರತಿಷ್ಠೆ ಮಾಡಿದಂತೆ ತೋರುತ್ತದೆ. ಗರ್ಭಗೃಹ ದ್ವಾರ, ದ್ವಾರಶಾಖೆಗಳಿಂದ ಅಲಂಕರಿಸಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದೆ. ಈ ಲಲಾಟಬಿಂಬದ ಎರಡು ಬದಿಗೆ ಮೂರುಸಾಲಿನ ಶಾಸನವಿದೆ. ಇದು ಇನ್ನೂ ಪ್ರಕಟವಾಗಿಲ್ಲ.

ಪಾಳುಬಿದ್ದ ದೇವಾಲಯದ ಆವರಣದಲ್ಲಿ ಇರುವ ಐದುಅಡಿ ಎತ್ತರದ ಬಳಪದಕಲ್ಲಿನ ಕಂಬ ಸುಂದರವಾಗಿದೆ. ಕೆಳಭಾಗ ಚೌಕಾಕಾರವಾಗಿದ್ದು ಪ್ರತಿ ಚೌಕದಲ್ಲಿ ಒಂದು ದೇವರ ಮೂರ್ತಿಯ ಶಿಲ್ಪವಿದೆ. ಎರಡನೇ ಭಾಗದಲ್ಲಿ ಹದಿನಾರು ಮೂಲೆಗಳಿವೆ ಹಾಗೂ ಅವು ಕುಸುರಿ ಕೆಲಸದಿಂದ ಸುಂದರವಾಗಿವೆ. ಮೂರನೆಯ ಭಾಗದಲ್ಲಿ ಗಂಟೆ ಆಕಾರವಾಗಿದ್ದು, ನಾಲ್ಕನೇ ಭಾಗದಲ್ಲಿ ದುಂಡಾದ ಬಳೆಗಳಿವೆ.

ಭಿತ್ತಿ ಶಿಖರ ಹಾಳಾಗಿದ್ದು ಮೂಲ ಶಿಖರದ ಸ್ಥಳದಲ್ಲಿ ಗಾರೆಯಿಂದ ಮಾಡಿದ ಗೋಳಾಕೃತಿಯ ಗುಮ್ಮಟವಿದೆ.

೨. **ಮೂರುಕಲ್ಲು ಮಠ :** ಇದು ಕೊಟ್ಟೂರು ನಗರದ ಉತ್ತರಭಾಗದಲ್ಲಿ ಕೂಡ್ಲಿಗಿ ರಸ್ತೆಯ ಪಕ್ಕದಲ್ಲಿದೆ. ಶಾಸನದಲ್ಲಿ ಇದನ್ನು ಉಡಕೇಶ್ವರ[6] ದೇವಸ್ಥಾನವೆಂದು ಉಲ್ಲೇಖ ಮಾಡಲಾಗಿದೆ. ಈ ದೇವಸ್ಥಾನವನ್ನು ಕಣಶಿಲೆಯಿಂದ ಕಟ್ಟಿದ್ದು, ಅಲ್ಲಲ್ಲಿ ತೋರಣ, ದ್ವಾರ, ಜಾಲಂಧ್ರಗಳಿಗೆ ಕರಿಶಿಲೆಯನ್ನು ಉಪಯೋಗಿಸಿದ್ದಾರೆ. ಪೂರ್ವಾಭಿಮುಖವಾಗಿರುವ ತ್ರಿಕೂಟಾಚಲ ದೇವಾಲಯವು ಕದಂಬನಾಗರ ಶೈಲಿ ಶಿಖರಗಳಿಂದ ಶೋಭಿಸುತ್ತಿದೆ. ಗರ್ಭಗೃಹ ಅಂತರಾಳ, ನವರಂಗ, ಮುಖಮಂಟಪದಲ್ಲಿ ಕಕ್ಷಾಸನಗಳಿವೆ. ದೇವಸ್ಥಾನದ ಹೊರನೋಟ ಕ್ರಮವಾಗಿ ಅಧಿಷ್ಠಾನ, ಭಿತ್ತಿ, ಕ[illegible]ೀತ ಮತ್ತು ಕದಂಬನಾಗರ ಶೈಲಿಯ ಶಿಖರಗಳಿವೆ.

**ಗರ್ಭಗೃಹ:** ಚೌಕಾಕಾರದ ಗರ್ಭಗೃಹದ ಮಧ್ಯದಲ್ಲಿ ಕರಿಶಿಲೆಯ ಪೀಠದಮೇಲೆ ಇರುವ ಶಿವಲಿಂಗವು ಸುಮಾರು

5 ಸೌ.ಇ.ಇ., ೯-೧, ಸಂಖ್ಯೆ ೧೮೭, ಪು. ೧೮೧, ೨೦ನೇ ಸಾಲು

6 ಅದೇ, ಸಂಖ್ಯೆ ೩೩೮, ಪು. ೩೫೮, ೨೩ನೇ ಸಾಲು

ಮೂರು ಅಡಿ ಎತ್ತರವಾಗಿದೆ. ಮೇಲ್ಛಾವಣಿಯು ಚೌರಸಗಳಿಂದ ಕೂಡಿದ್ದು, ಕೊನೆಯಲ್ಲಿ ಕಮಲ ವಿನ್ಯಾಸ ವಿದೆ. ಗರ್ಭಗೃಹದ ದ್ವಾರವು ಸೂಕ್ಷ್ಮ ವಿನ್ಯಾಸದಿಂದ, ದ್ವಾರಶಾಖೆಗಳಿಂದ ಅಲಂಕೃತವಾಗಿದೆ. ಲಲಾಟಬಿಂಬ ದಲ್ಲಿ ಗಜಲಕ್ಷ್ಮಿ ಇದೆ.

ಅಂತರಾಳದ ಬಾಗಿಲು ದ್ವಾರಶಾಖೆಗಳಿಂದ ಕೂಡಿದ್ದು, ಇಕ್ಕೆಲಗಳಲ್ಲಿ ದ್ವಾರಪಾಲಕ ಹಾಗೂ ಅಮೃತ ಕಳಸಗಳ ಉಬ್ಬುಶಿಲ್ಪಗಳಿವೆ. ಲಲಾಟಬಿಂಬ ವಿಲ್ಲ. ದ್ವಾರಬಾಗಿಲ ಶಾಖೆಗಳ ಎರಡು ಬದಿಗೆ ವಜ್ರಾಕೃತಿಯ ನಾಲ್ಕು ದಳ ಹೂಗಳನ್ನು ಕೆತ್ತಿದ ಜಾಲಂಧ್ರಗಳಿವೆ. ಉಳಿದೆರಡು ಗರ್ಭಗೃಹಗಳು ಇದೇ ರೀತಿಯಲ್ಲಿವೆ.

**ನವರಂಗ :** ಮೂರು ಗರ್ಭಗೃಹಗಳಿಗೆ ಹೊಂದಿ ಕೊಂಡಂತೆ ನವರಂಗವಿದೆ. ನಾಲ್ಕು ಕಂಬಗಳ ಮಧ್ಯ ಸ್ವಲ್ಪ ಎತ್ತರವಾದ ನೃತ್ಯಮಂಟಪವಿದೆ. ಮೇಲ್ಛಾ ವಣಿಯು ಚೌರಸಗಳಿಂದ ಕೂಡಿ ತುದಿಯಲ್ಲಿ ಅರಳಿದ ಕಮಲ ವಿನ್ಯಾಸವಿದೆ. ಕಂಬಗಳ ಕೆಳಗಿನ ಭಾಗವು ಚೌಕಾಕಾರವಾಗಿದ್ದು, ಎರಡನೇ ಭಾಗವು ಎಂಟು ಏಣು ಗಳಿಂದ ಕೂಡಿದೆ. ಮೂರನೇ ಭಾಗದಲ್ಲಿ ಚೌಕಾಕಾರ, ನಾಲ್ಕನೇ ಭಾಗದಲ್ಲಿ ದುಂಡನೆಯ ಬಳೆಗಳಿವೆ. ಮೇಲ್ಭಾಗ ದಲ್ಲಿ ಚೌಕಾಕಾರದ ಬೋದಿಗೆ ಇದೆ. ನವರಂಗದಲ್ಲಿ ದೇವ ಕೋಷ್ಠಗಳಿಲ್ಲ.

**ಮುಖಮಂಟಪ :** ಮುಖಮಂಟಪವು ದ್ವಾರ, ಶಾಖೆಗಳಿಂದ ಅಲಂಕೃತವಾಗಿದೆ. ರತ್ನಶಾಖೆ, ಲತಾ ಶಾಖೆ, ಸ್ಥಂಬಶಾಖೆ, ಲತಾಸುರಳಿ ಶಾಖೆಗಳಲ್ಲಿ, ಹಂಸ ನರ್ತಕಿಯರ ಶಿಲ್ಪಗಳಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದೆ. ತೋರಣದಲ್ಲಿ ದ್ರಾವಿಡಶೈಲಿಯ ಗೋಪುರ ಗಳಿವೆ.ಮುಖಮಂಟಪಕ್ಕೆ ಹೊಂದಿಕೊಂಡು ಕಕ್ಷಾಸನವಿದೆ.

ದೇವಾಲಯದ ಹೊರನೋಟದಲ್ಲಿ ಅಧಿಷ್ಠಾನ, ಭಿತ್ತಿ, ಕಪೋತ ಶಿಖರಗಳು ಸಾಮಾನ್ಯರನ್ನು ಸಹಾ ಆಕರ್ಷಿಸುವಷ್ಟು ಸುಂದರವಾಗಿವೆ. ಅಧಿಷ್ಠಾನದಲ್ಲಿ ಐದು ಸರಳ ಪಟ್ಟಿಕೆಗಳಿವೆ. ಭಿತ್ತಿಭಾಗದಲ್ಲಿ ಯಾವುದೇ ಅಲಂಕಾರವಿಲ್ಲದೆ ಸರಳವಾಗಿದೆ. ಕದಂಬನಾಗರ ಶಿಖರ ಪಿರಮಿಡ್ ಆಕಾರದಲ್ಲಿ ಏರುತ್ತಾ ಕೊನೆಯಲ್ಲಿ ಚೌಕಾ ಕಾರದ ಸ್ತೂಪಿ ಇದೆ. ಕಳಸ ಹಾಳಾಗಿದೆ. ಸುತ್ತ ಮುತ್ತಲೂ ಭಗ್ನಶಿಲ್ಪ ಅವಶೇಷಗಳನ್ನು ನೋಡ ಬಹುದು.

೩. **ಸಿರಿಮಠ ದೇವಸ್ಥಾನ :** ಈ ದೇವಸ್ಥಾನವು ಕೊಟ್ಟೂರು ಪೂರ್ವಭಾಗದಲ್ಲಿದ್ದು, ಕೂಡ್ಲಿಗಿ ರಸ್ತೆಯ ದಕ್ಷಿಣಭಾಗದಲ್ಲಿದೆ. ಪೂರ್ವಾಭಿಮುಖವಾಗಿರುವ ಈ ಗುಡಿಯು ಗರ್ಭಗೃಹ ಅಂತರಾಳ, ಸಭಾಮಂಟಪದ ಒಂದು ಅಂಕಣ ಮಾತ್ರ ಉಳಿದಿವೆ. ಉಳಿದ ಭಾಗ ಮತ್ತು ಶಿಖರ ಹಾಳಾಗಿವೆ. ಸಭಾಮಂಟಪದ ಮಧ್ಯ ದಲ್ಲಿ ಗರ್ಭಗುಡಿಗೆ ಎದುರಾಗಿ ಭಗ್ನ ನಂದಿ ಇದೆ.

**ಗರ್ಭಗೃಹ :** ಚೌಕಾಕಾರದ ಗರ್ಭಗೃಹದಲ್ಲಿ ಕರಿಕಲ್ಲಿನ ಶಿವಲಿಂಗವಿದೆ. ಮೇಲ್ಛಾವಣಿ ಚೌರಸಗಳಿಂದ ಕೂಡಿದ್ದು, ಕೊನೆಯ ಚೌರಸದಲ್ಲಿ ಕಮಲ ವಿನ್ಯಾಸ ವಿದೆ. ಗರ್ಭಗೃಹದ ದ್ವಾರವು ದ್ವಾರಶಾಖೆಗಳಿಂದ ಕೂಡಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದೆ. ಅಂತರಾಳದಲ್ಲಿ ಇತ್ತೀಚೆಗೆ ಪ್ರತಿಷ್ಠಾಪಿಸಿದ ನಂದಿ ವಿಗ್ರಹವಿದೆ. ಅಂತರಾಳದ ದ್ವಾರವು ರತ್ನಶಾಖೆ, ಲತಾಶಾಖೆ, ಸ್ಥಂಬಶಾಖೆ, ಲತಾಸುರಳಿ ಶಾಖೆಗಳಿಂದ ಕೂಡಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದೆ. ದ್ವಾರಶಾಖೆಗಳ ಎರಡು ಬದಿಗೆ ವಜ್ರಾಕೃತಿ ವಿನ್ಯಾಸ ದಿಂದ ಒಳಗೊಂಡ ಜಾಲಂಧ್ರಗಳಿವೆ. ಕೆಳಗೆ ಎರಡೂ ಬದಿಗೆ ದ್ವಾರಪಾಲಕರ ಹಾಗೂ ಅಮೃತ ಕಳಸಗಳ ಉಬ್ಬುಶಿಲ್ಪಗಳಿವೆ.

**ಸಭಾಮಂಟಪ :** ಇದು ಹಾಳಾಗಿದ್ದು ಒಂದು ಅಂಕಣ ಮಾತ್ರ ಉಳಿದಿದೆ. ಅಂತರಾಳ ದ್ವಾರದ ಎರಡು ಬದಿಗೆ ಎರಡು ದೇವಕೋಷ್ಠಗಳಿವೆ.ದೇವಕೋಷ್ಠಗಳನ್ನು ದ್ವಾರಪಟ್ಟಿಕೆಗಳಿಂದ ಅಲಂಕರಿಸಲಾಗಿದ್ದು, ಮೇಲೆ ತೋರಣದಲ್ಲಿ ದ್ರಾವಿಡಶೈಲಿಯ ಗೋಪುರಗಳಿವೆ. ಈಗ ದೇವಕೋಷ್ಠಗಳಲ್ಲಿ ಯಾವುದೇ ವಿಗ್ರಹಗಳಿಲ್ಲ.ಪಾಳುಬಿದ್ದ ಬಯಲು ಸಭಾಮಂಟಪದಲ್ಲಿ ಗರ್ಭಗುಡಿಗೆ ಎದುರಾಗಿ ೧೦ ಅಡಿ ಅಂತರದಲ್ಲಿ ೩ ಅಡಿ ಎತ್ತರದ ಭಗ್ನ ನಂದಿ ಇದೆ. ನಂದಿಯನ್ನು ದಾಟಿ ಮುಂದೆ ಹೋದರೆ ಎರಡು ಸೋಪಾನಗಳಿವೆ. ಸಭಾಮಂಟಪ ಈ ಸೋಪಾನದ ವರೆಗೆ ಇತ್ತೆಂದು ತಿಳಿದುಬರುತ್ತದೆ. ಆವರಣದಲ್ಲಿ ಅನೇಕ ಭಗ್ನ ಅವಶೇಷಗಳು ಬಿದ್ದಿವೆ.

ಶಾಸನಗಳು: ಕೊಟ್ಟೂರಿನಲ್ಲಿ ಇದುವರೆಗೆ ಒಟ್ಟು ಹನ್ನೊಂದು ಶಾಸನಗಳು ಲಭ್ಯವಾಗಿವೆ. ಅವುಗಳಲ್ಲಿ ನಾಲ್ಕು ಮಾತ್ರ ಪ್ರಕಟಿತ[7] ; ಉಳಿದ ಏಳು ಅಪ್ರಕಟಿತ. ಅವುಗಳಲ್ಲಿ ಅತಿ ಪ್ರಾಚೀನ ಶಾಸನ ಇದುವರೆಗೆ ತಿಳಿದಂತೆ ಗದ್ದೆಕಲ್ಲೇಶ್ವರ ದೇವಸ್ಥಾನದ ಮುಂದಿರುವ ಕಲ್ಯಾಣ ಚಾಲುಕ್ಯ ತ್ರಿಭುವನಮಲ್ಲನ ಕಾಲದ್ದು (ಕ್ರಿ.ಶ. ೧೦೧೨ ಏಪ್ರಿಲ್ ೧ ಸೋಮವಾರ). ಈ ಶಾಸನದಲ್ಲಿ ರಾಮೇಶ್ವರ ದೇವಸ್ಥಾನ(ಗದ್ದೆಕಲ್ಲೇಶ್ವರ)ದ ಅರ್ಚಕರಾದ ಅಮೃತರಾಶಿ ಪಂಡಿತರಿಗೆ ದೇವಸ್ಥಾನದ ಸೇವೆಗಾಗಿ ಕೊಟ್ಟ ಭೂದಾನವನ್ನು ಉಲ್ಲೇಖಿಸಲಾಗಿದೆ.

ಮತ್ತೊಂದು ಶಾಸನವು ಹೊಯ್ಸಳ ವೀರ ಬಲ್ಲಾಳನ ಕಾಲಕ್ಕೆ ಸಂಬಂಧಿಸಿದ್ದು, ಮೂರುಕಲ್ಲು ಮಠದ ಮುಂದಿದೆ. ಈ ಶಾಸನದಲ್ಲಿ, ಹೊಯ್ಸಳ ದಂಡನಾಯಕನಾದ ಕೇಶವ ದಂಡನಾಯಕನು ಕೊಟ್ಟೂರ ಸೀಮೆಯ ಹತ್ತಿರದ ಮಗಿವಾಳವಿನ (?) ಹಳ್ಳಿಯನ್ನು ಬ್ರಾಹ್ಮಣರಿಗೆ ದತ್ತಿಕೊಟ್ಟುದನ್ನೂ ಮಂತ್ರಿ ಮುಕ್ತಿದೇವನು 'ಉಡಕೇಶ್ವರ' (ಮೂರುಕಲ್ಲುಮಠ) ದೇವಸ್ಥಾನಕ್ಕೆ ಭೂದಾನ ಮಾಡಿದುದನ್ನೂ ಉಲ್ಲೇಖಿಸಲಾಗಿದೆ.

ನಾನು ಆಯ್ಕೆ ಮಾಡಿದ ಕೆಲವು ಕಲ್ಯಾಣ ಚಾಲುಕ್ಯ ವಾಸ್ತುಶಿಲ್ಪಗಳನ್ನು ಮಾತ್ರ ಇಲ್ಲಿ ಸಮೀಕ್ಷೆ ಮಾಡಿದ್ದು, ವಿಜಯನಗರ ಕಾಲದ ಉಳಿದ ದೇವಸ್ಥಾನಗಳನ್ನು ಇಲ್ಲಿ ಗಮನಿಸಿರುವುದಿಲ್ಲ. ನನ್ನ ಅಧ್ಯಯನದಿಂದ ತಿಳಿದುಬಂದಿರುವ ಸಂಗತಿಗಳೆಂದರೆ,

೧. ಕೊಟ್ಟೂರಿನಲ್ಲಿ ಕಂಡುಬರುವ ದೇವಸ್ಥಾನಗಳು ಒಟ್ಟಾರೆ ಚಾಲುಕ್ಯಶೈಲಿಯ ಅಭ್ಯಾಸಕ್ಕೆ ಉಪಯುಕ್ತವಾಗಿವೆ. ಆದರೆ ಕೆಲವು ಪ್ರಾದೇಶಿಕ ವೈಶಿಷ್ಟ್ಯಗಳಿವೆ.

೨. ಈ ದೇವಸ್ಥಾನಗಳಿಗೆ ಬಳಸಿದ ಕಲ್ಲು ಕಣಶಿಲೆ ಎಂಬುದು ಒಂದು ವಿಶೇಷ. ಈಗಾಗಲೇ ಹೇಳಿದಂತೆ ಕಲ್ಯಾಣ ಚಾಲುಕ್ಯರ ಶಿಲ್ಪಗಳಲ್ಲಿ ತಮ್ಮ ಶೈಲಿಯ ಮತ್ತು ಶಿಲ್ಪಕ್ಕೆ ಬಳಪದ ಅಥವಾ ಪಾಟಿಕಲ್ಲನ್ನು ಬಳಸಿರುವುದು ಕಂಡುಬರುತ್ತದೆ. ಬಹುಶಃ ಇಲ್ಲಿ ಪ್ರಾದೇಶಿಕವಾಗಿ ಸಿಗುವ ಕಣಶಿಲೆಯನ್ನೇ ಶಿಲ್ಪಗಳಿಗೆ ಬಳಸಿರುವುದು ಕಂಡುಬರುತ್ತದೆ.

೩. ಇದರಿಂದಾಗಿ ಕಲ್ಯಾಣ ಚಾಲುಕ್ಯ ವೈಶಿಷ್ಟ್ಯವಾದ ಶಿಲ್ಪ ಅಲಂಕಾರದ ಕುಸುರಿ ಕೆಲಸವು ಈ ದೇವಸ್ಥಾನಗಳಲ್ಲಿ ಕಂಡುಬರುವುದಿಲ್ಲ.

೪. ಈ ದೇವಸ್ಥಾನಗಳ ಹೆಸರುಗಳು ಜನರ ನಿತ್ಯ ವ್ಯವಹಾರದಲ್ಲಿ ಮಾರ್ಪಾಡು ಹೊಂದಿದ್ದು, ಸುದೈವದಿಂದ ದೇವಸ್ಥಾನಗಳಿಗೆ ಸಂಬಂಧಿಸಿದ ಶಾಸನಗಳು ಲಭಿಸಿದ್ದರಿಂದ ನಮ್ಮ ಅಧ್ಯಯನಕ್ಕೆ ಅವುಗಳ ನಿಜವಾದ ಹೆಸರುಗಳನ್ನು ತಿಳಿಯಲು ಸಾಧ್ಯವಾಗಿದೆ; ಇತಿಹಾಸಕ್ಕೆ ಬೆಳಕು ಬೀಳುತ್ತಿದೆ.

೫. ಕೊಟ್ಟೂರಿನಲ್ಲಿ ಇದುವರೆಗೆ ಕಂಡುಬರುವ ಕಲ್ಯಾಣ ಚಾಲುಕ್ಯರ ಶೈಲಿಯ ವಾಸ್ತುಶಿಲ್ಪ ಮತ್ತು ಶಾಸನಗಳ ಅಧ್ಯಯನದಿಂದ ತಕ್ಕಮಟ್ಟಿಗೆ ಪ್ರಾದೇಶಿಕತೆಯನ್ನು ಗುರುತಿಸಲು ಸಾಧ್ಯವಾಗಿದೆ.*

---

7 ಅದೇ, ೯–೧ ಮತ್ತು ೨

* ಈ ಪ್ರಬಂಧವನ್ನು ಸಿದ್ಧಪಡಿಸುವಲ್ಲಿ ಮಾರ್ಗದರ್ಶನ ಮಾಡಿದ ನನ್ನ ಸಂಶೋಧನ ಮಾರ್ಗದರ್ಶಿಗಳಾದ ಡಾ॥ ಎಚ್. ಆರ್. ರಘುನಾಥಭಟ್ಟರಿಗೆ ಕೃತಜ್ಞತೆಗಳು.